ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1143
ಸದಸ್ಯರ ಹೆಸರು : ಶ್ರೀ. ಐವನ್ ಡಿ' ಸೋಜಾ
ಉತ್ತರಿಸುವವರು : ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು
ಉತ್ತರಿಸಬೇಕಾದ ದಿನಾಂಕ : 20/12/2018

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿರುವ ಎಷ್ಟು ಅಂಗನವಾಡಿಗಳಲ್ಲಿ ವಿದ್ಯುತ್ ಬಿಲ್ಲು ಪಾವತಿ ಮಾಡದೇ ವಿದ್ಯುತ್ ಸರಬರಾಜು ನಿಲ್ಲಿಸಲಾಗಿದೆ ಎಂಬ ಆರೋಪವಿರುವುದು ನಿಜವೇ; ಹಾಗಿದ್ದಲ್ಲಿ, ಕಡಿತಗೊಳಿಸಲಾಗಿರುವ ವಿದ್ಯುತ್ ಸಂಪರ್ಕ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | ಹೌದು.<br><br>1298 ಅಂಗನವಾಡಿ ಕೇಂದ್ರಗಳಿಗೆ ವಿದ್ಯುತ್ ಸಂಪರ್ಕ ಕಡಿತಗೊಂಡಿರುತ್ತದೆ.<br><br>ಜಿಲ್ಲಾವಾರು ವಿವರವನ್ನು ಅನುಬಂಧಲ್ಲಿ ಒದಗಿಸಲಾಗಿದೆ. |
| ಆ | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಮಾರು 50ಕ್ಕೂ ಅಧಿಕ ಅಂಗನವಾಡಿಗಳಲ್ಲಿ ಇಲಾಖೆಯವರು ವಿದ್ಯುತ್ ಸರಬರಾಜು ಕಡಿತಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು; | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 3 ಅಂಗನವಾಡಿ ಕೇಂದ್ರಗಳಿಗೆ ವಿದ್ಯುತ್ ಸಂಪರ್ಕ ಕಡಿತಗೊಂಡಿರುತ್ತದೆ. ಈ ಪೈಕಿ 2 ಕೇಂದ್ರಗಳಿಗೆ ಗ್ರಾಮಪಂಚಾಯಿತಿಯಿಂದ ವಿದ್ಯುತ್ ಬಿಲ್ಲನ್ನು ಪಾವತಿಸಲು ಕ್ರಮ ಕೈಗೊಳ್ಳಲಾಗುವುದು. ಒಂದು ಕೇಂದ್ರವು ಶಾಲಾ ಕೊಠಡಿಯಲ್ಲಿ ನಡೆಯುತ್ತಿದ್ದು, ಶಾಲೆಯು ಮುಚ್ಚಿರುವ ಕಾರಣ ವಿದ್ಯುತ್ ಸಂಪರ್ಕ ಕಡಿತಗೊಂಡಿರುತ್ತದೆ. ಅಂಗನವಾಡಿ ಕೇಂದ್ರಕ್ಕೆ ಪ್ರತ್ಯೇಕ ವಿದ್ಯುತ್ ಸಂಪರ್ಕ ಅಳವಡಿಸಲು ಕ್ರಮ ಕೈಗೊಳ್ಳಲಾಗುವುದು. |
| ಇ | ಮೂಲಭೂತ ಸೌಕರ್ಯಗಳಿಲ್ಲದೇ ಅಂಗನವಾಡಿ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಈ | ಅಂಗನವಾಡಿ ಕೇಂದ್ರ ನಡೆಸಲು ಇಲಾಖೆಯ ಪರವಾಗಿ ಅಗತ್ಯವಿದೆಯೇ; ಅನಧಿಕೃತವಾಗಿ ಕಾರ್ಯನಿರ್ವಹಿಸುತ್ತಿರುವ ಅಂಗನವಾಡಿಗಳ ಸಂಖ್ಯೆ ಎಷ್ಟು? (ವಿವರ ಒದಗಿಸುವುದು) | ಅಂಗನವಾಡಿ ಕೇಂದ್ರಗಳನ್ನು ಇಲಾಖಾ ವತಿಯಿಂದ ಮಾತ್ರ ನಡೆಸಲಾಗುತ್ತಿದೆ.<br><br>ಅನಧಿಕೃತವಾಗಿ ಕಾರ್ಯನಿರ್ವಹಿಸುತ್ತಿರುವ ಅಂಗನವಾಡಿ ಕೇಂದ್ರಗಳು ಇರುವುದಿಲ್ಲ. |

ಸಂ:ಮಮಇ 356 ಐಸಿಡಿ 2018

(ಡಾ. ಜಯಮಾಲ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ
ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು.

| ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಐವನ್ ದಿ ಸೋಜಾ ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 1143ಕ್ಕೆ ಅನುಬಂಧ | | |
|---|---|---|
| ಕ್ರ.ಸಂ. | ಜಿಲ್ಲೆ ಹೆಸರು | ವಿದ್ಯುತ್ ಬಿಲ್ ಪಾವತಿಸಲಾಗದೇ ವಿದ್ಯತ್ ಸಂಪರ್ಕ ಕಡಿತಗೊಳಿಸಿರುವ ಅಂಗನವಾಡಿ ಕೇಂದ್ರಗಳ ಸಂಖ್ಯೆ |
| 1 | ಬೆಳಗಾವಿ | 91 |
| 2 | ಚಿಕ್ಕಬಳ್ಳಾಪುರ | 113 |
| 3 | ಚಿಕ್ಕಮಗಳೂರು | 24 |
| 4 | ದಕ್ಷಿಣ ಕನ್ನಡ | 3 |
| 5 | ದಾವಣಗೆರೆ | 17 |
| 6 | ಗದಗ | 98 |
| 7 | ಹಾಸನ | 272 |
| 8 | ಹಾವೇರಿ | 263 |
| 9 | ಮೈಸೂರು | 211 |
| 10 | ರಾಮನಗರ | 96 |
| 11 | ಯಾದಗಿರಿ | 110 |
| ಒಟ್ಟು | | 1298 |